# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

೩ನೇ ವರ್ಷ ೬ನೇ ಸಂಚಿಕೆ ಕೊಪ್ಪ ೩೦-೯-೧೯೮೪ ಭಾನುವಾರ ಬೆಲೆ ೪೦ ಪೈಸೆ


## ನೆಮ್ಮಾರು ಜನಸಂಪರ್ಕ ಸಭೆ ವಿವರಗಳು

(ವರದಿ: ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ: ಜಿಲ್ಲೆಯಲ್ಲಿ ೨೩ನೆಯ ಹಾಗೂ ಶೃಂಗೇರಿ ತಾ|| ನಲ್ಲಿ ೨ನೆಯ ಜನಸಂಪರ್ಕ ಸಭೆ ನೆಮ್ಮಾರಿನಲ್ಲಿ ಶಾಸಕ ಗೋವಿಂದ ಗೌಡರ ಅಧ್ಯಕ್ಷತೆಯಲ್ಲಿ ನಡೆಯಿತು. ಪೋಲೀಸ್ ಇಲಾಖೆಯ ಹೊರತು ಉಳಿದೆಲ್ಲ ಇಲಾಖೆಗಳ ಜಿಲ್ಲಾ ಮುಖ್ಯಾಧಿಕಾರಿಗಳು ಭಾಗವಹಿಸಿದ್ದರು. ಕೆಲವು ಸಮಸ್ಯೆ–ಬೇಡಿಕೆಗಳು ಸ್ಥಳದಲ್ಲೇ ಇತ್ಯರ್ಥವಾಗಿ, ಕೆಲವಕ್ಕೆ ಕಾಲಮಿತಿಯುಳ್ಳ ಮತ್ತೆ ಕೆಲವಕ್ಕೆ ಮುಂದಿನ ವರ್ಷ ಮಾಡಿಸಿಕೊಡುವ ಭರವಸೆ ಬಂತು.

ಕೆಲವು ಬೇಡಿಕೆಗಳು ಮತ್ತು ಭರವಸೆಗಳ ವಿವರ ಇಲ್ಲಿದೆ :

ಶಾಲಾ ಕಟ್ಟಡ, ರಸ್ತೆಗಳು ಮುಂತಾದ ಅಭಿವೃದ್ಧಿ ಬೇಡಿಕೆಗಳ ಬಗ್ಗೆ ಈ ಸಾಲಿನಲ್ಲಿ ಸೇರದಿದ್ದವನ್ನು ಮುಂದಿನ ವರ್ಷ ಸೇರಿಸುವ ಭರವಸೆ; ಐ.ಆರ್.ಡಿ.ಪಿ. ಪಟ್ಟಿಯನ್ನು ಪುನರ್ ಪರಿಶೀಲಿಸಿ ವಂಚಿತರಾದವರ ಹೆಸರುಗಳನ್ನು ಹೊಸದಾಗಿ ಸೇರಿಸುವ ಭರವಸೆ.

ಲೋಕೋಪಯೋಗಿ ಇಲಾಖೆಯಿಂದ ಮಂಜೂರಾಗಿರುವ ೫ ಕಾಲು ಸೇತುವೆಗಳ ಶೀಘ್ರ ನಿರ್ಮಾಣ; ವಿಶೇಷ ಚರ್ಚೆಗೆ ಪಾತ್ರವಾದ ನೆಮ್ಮಾರು-ಹರೂರು ರಸ್ತೆಗೆ ಕೂಡಲೆ ಅಂದಾಜು ಪಟ್ಟಿ ತಯಾರಿಸಿ ಈ ವರ್ಷವೇ ದುರಸ್ತಿ (ಜಿಲ್ಲಾಧಿಕಾರಿಗಳಿಂದ ಈ ವರ್ಷವೇ ಹಣದ ವ್ಯವಸ್ಥೆಯ ಭರವಸೆ.) ಸಿಂದೋಡಿ-ಸಿರಿಮನೆ-ಚಟ್ನಮನೆ ರಸ್ತೆಗೆ ಈ ವರ್ಷ ಹಣವಿಲ್ಲದ್ದರಿಂದ ಮುಂದಿನ ವರ್ಷ ದುರಸ್ತಿಯ ಭರವಸೆ.

**ತೂಗು ಸೇತುವೆ ಚರ್ಚೆಗೆ ಬರಲಿಲ್ಲ**

ನೆಮ್ಮಾರು-ಯಡದಳ್ಳಿ ನಡುವೆ ತುಂಗಾ ನದಿಗೆ ಅತಿ ಕಡಿಮೆ ಖರ್ಚಿನಲ್ಲಿ ತೂಗು ಸೇತುವೆ ನಿರ್ಮಾಣದ ಯೋಜನೆಯೊಂದನ್ನು ಅದೇ ಹಳ್ಳಿಯವರಾದ ತಜ್ಞ ಇಂಜಿನಿಯರ್ ಒಬ್ಬರು ತಯಾರಿಸಿ ಸರ್ಕಾರಕ್ಕೆ ಸಲ್ಲಿಸಿದ್ದು ಗ್ರಾಮಸ್ಥರು ಅದಕ್ಕಾಗಿ ಒತ್ತಾಯಿಸುತ್ತ ಬಂದಿದ್ದರೂ ಈ ಸಭೆಯಲ್ಲಿ ಅದು ಚರ್ಚೆಗೆ ಬರಲಿಲ್ಲ. ಹಿಂದಿನ ಸರ್ಕಾರಕ್ಕೆ ಅರ್ಜಿ ಕೊಟ್ಟೇ ಸುಸ್ತಾಗಿರಬೇಕು !

ಕಂದಾಯ ಇಲಾಖೆಯ ಬಗೆಗಿನ ಬೇಡಿಕೆಗಳಲ್ಲಿ ಮುಖ್ಯವಾಗಿ, ಭೂ ಸುಧಾರಣೆ ಜಮೀನಿನ ಪೋಡ್ ದುರಸ್ತಿ ಸರ್ವೆ ಮಾಡಿಸುವ ವ್ಯವಸ್ಥೆ ಮತ್ತು ಭೂ ಲಭ್ಯತಾ ಪಟ್ಟಿಯಲ್ಲಿ ಹಿಂದೆ ಬಿದ್ದ ಕಿಗ್ಗ ಹೋಬಳಿಯ ವ್ಯವಸಾಯ ಯೋಗ್ಯ ಭೂಮಿಯ ಪಟ್ಟಿಯನ್ನು ಮಳೆಗಾಲದ ನಂತರ ಮಾಡಿಸುವ ಭರವಸೆ.

**ಕೆರೆಕಟ್ಟೆಗೆ ಸಹಕಾರ ಸಂಘ**

ಕೆರೆಕಟ್ಟೆಯಲ್ಲಿ ಒಂದು ತಿಂಗಳೊಳಗಾಗಿ ಶೃಂಗೇರಿ ನೌಕರರ ಪ|| ಸಂಘವು ಸರ್ಕಾರದ ೩೦ ಸಾವಿರ ರೂ. ನೆರವಿನೊಂದಿಗೆ ಶಾಖೆಯೊಂದನ್ನು ಆರಂಭಿಸುತ್ತದೆ. ತಪ್ಪಿದಲ್ಲಿ ಸ್ಥಳೀಯ ಯುವಕ ಸಂಘಕ್ಕೆ ಅನುಮತಿ ಕೊಡಲಾಗುವುದು. ಅಲ್ಲಿನ ಇನ್ನೆರಡು ಬೇಡಿಕೆಗಳಾದ ಜಾನುವಾರು ಆಸ್ಪತ್ರೆ ಮತ್ತು ಆರೋಗ್ಯ ಕಾರ್ಯಕರ್ತೆಯ ನೇಮಕಕ್ಕೆ ವ್ಯವಸ್ಥೆ ಮಾಡುವ ಭರವಸೆ.

ತಾಲ್ಲೂಕಿನ ಶೇ. ೬೦ರಷ್ಟು ಗಿರಿಜನರಿರುವ ಜಾಗಕ್ಕೆ ಗಿರಿಜನ ಅಭಿವೃದ್ಧಿಯ ಅಸ್ಪತ್ರೆ ಬರದೆ ಬೇಗಾರಿಗೆ ಮಂಜೂರಾದ ಬಗ್ಗೆ ತೀವ್ರ ವಿರೋಧ ವ್ಯಕ್ತವಾಯಿತು.

(೪ನೇ ಪುಟಕ್ಕೆ)

## ತಹಸಿಲ್ದಾರ್ ಭರವಸೆಮೇಲೆ ಬೊಮ್ಮಾಪುರದ ಭೂರಹಿತರ ಸತ್ಯಾಗ್ರಹ ನಿಲುಗಡೆ

**ಕೊಪ್ಪ: ಬೊಮ್ಮಲಾಪುರದ ಭೂ ರಹಿತರು ನ್ಯಾಯಕ್ಕಾಗಿ ಒತ್ತಾಯಿಸಿ, ಇಲ್ಲಿನ ತಾ|| ಕಛೇರಿಯೆದುರು ಸೆ. ೨೯ರಂದು ಹೂಡಿದ್ದ ಅನಿರ್ದಿಷ್ಟ ಕಾಲದ ಧರಣಿ. ಉಪವಾಸ ಸತ್ಯಾಗ್ರಹವನ್ನು ತಹಸೀಲ್ದಾರರ ಭರವಸೆಯಂತೆ ತಾತ್ಕಾಲಿಕವಾಗಿ ನಿಲ್ಲಿಸಿದ್ದಾರೆ.**

ತಮ್ಮಲ್ಲಿ ಕೆಲವರಿಗೆ ಮಂಜೂರಾತಿಗಾಗಿ ರಿಕಾರ್ಡ್ ಆಗಿದ್ದ ಭೂಮಿಯನ್ನು ಸೆ. ೧೫ರಂದು ಸಭೆ ನಡೆಸಿದ ತಾ|| ದರ್ಖಾಸ್ತು ಸಮಿತಿ ರದ್ದು ಮಾಡಿದ್ದು ಹಾಗೂ ಹರಿಜನರಿಗೆ ರಿಕಾರ್ಡ್ ಆಗಿದ್ದ ಭೂಮಿಯನ್ನು ಬೇರೊಬ್ಬರಿಗೆ ಶಿಫಾರ್ಸು ಮಾಡಿದ್ದು ಈ ಸತ್ಯಾಗ್ರಹಕ್ಕೆ ಮೂಲವೆಂದು ಸತ್ಯಾಗ್ರಹಿಗಳು ತಿಳಿಸಿದರು.

ಪುನಃ ದಾಖಲೆಗಳೆಲ್ಲ ಪರಿಶೀಲಿಸಿ, ಇನ್ನೆರಡು ತಿಂಗಳೊಳಗೆ ನ್ಯಾಯ ದೊರಕಿಸಿ ಕೊಡುವುದಾಗಿ ಹಾಗೂ ಅಲ್ಲಿಯವರೆಗೆ ಈ ಸಭೆಯ ತೀರ್ಮಾನಗಳನ್ನು ತಡೆ ಹಿಡಿಯುವುದಾಗಿ ತಹಸೀಲ್ದಾರರು ಭರವಸೆ ಕೊಟ್ಟ ಪ್ರಕಾರ ಸತ್ಯಾಗ್ರಹವನ್ನು ೨ ತಿಂಗಳ ಮಟ್ಟಿಗೆ ನಿಲ್ಲಿಸಿರುವುದಾಗಿಯೂ ಅವರುಗಳು 'ಮುಂಜಾವು'ಗೆ ತಿಳಿಸಿದ್ದಾರೆ.

### ಕೊಪ್ಪ, ನ.ರಾ.ಪುರದಲ್ಲೂ ಟಿ. ವಿ. ದರ್ಶನ ಸಾಧ್ಯ!

ಕೊಪ್ಪ: ಭದ್ರಾವತಿಯಿಂದ ಮರುಪ್ರಸಾರವಾಗುವ ದೂರದರ್ಶನ ಕಾರ್ಯಕ್ರಮಗಳು ನ.ರಾ.ಪುರದಲ್ಲಿ ಸ್ಪಷ್ಟವಾಗಿ ಮೂಡಿ ಬರುತ್ತಿವೆಯೆನ್ನಲಾಗಿದೆ. ಕೊಪ್ಪದಲ್ಲೂ ಸಾಕಷ್ಟು ಚೆನ್ನಾಗಿ ಬರುತ್ತಿವೆ ಎಂದು ತಿಳಿದುಬಂದಿದೆ. ಆ್ಯಂಟೆನಾವನ್ನು ೧೮ ಎಲಿಮೆಂಟ್ ಇರುವಂತೆ ವಿಶೇಷವಾಗಿ ತಯಾರು ಮಾಡಿಸಿಕೊಂಡು, ಬೂಸ್ಟರ್ ಸಾಮರ್ಥ್ಯವನ್ನು ೧೧೦ ಡಿಬಿಗಿಂತ ಹೆಚ್ಚಿಗೆ ಅಳವಡಿಸಿಕೊಂಡರೆ, ಅತ್ಯುತ್ತಮವಾಗಿ ಚಿತ್ರ ಮೂಡಿ ಬರುತ್ತದೆಯೆಂದು ಟಿ. ವಿ. 'ಫಲಾನುಭವಿ'ಯೊಬ್ಬರು 'ಮುಂಜಾವು'ಗೆ ತಿಳಿಸಿದರು

ಇನ್ನು ೬ ತಿಂಗಳೊಳಗೆ ಆಗುಂಬೆಯಲ್ಲೂ ಒಂದು ಟಿ.ವಿ. ಮರುಪ್ರಸಾರಕೇಂದ್ರ ಆರಂಭವಾಗಲಿದೆಯೆನ್ನಲಾಗಿದೆ. (ಇವೆಲ್ಲ ಸಾಮಾನ್ಯವಾಗಿ ೨೫ ಕಿ. ಮೀ. ವ್ಯಾಪ್ತಿಯುಳ್ಳವಾಗಿರುತ್ತವೆ.)

### ರೈತವಿದ್ಯಾರ್ಥಿ ಒಕ್ಕೂಟದಿಂದ ತರಗತಿ ಬಹಿಷ್ಕಾರ

ಕೊಪ್ಪ: ಜಿಲ್ಲಾ ರೈತ ವಿದ್ಯಾರ್ಥಿ ಒಕ್ಕೂಟದ ಕರೆಯಂತೆ ಸೆ. ೨೮ರಂದು ಇಲ್ಲಿನ ಪ್ರ.ದ.ಕಾಲೇಜು ರೈತ ವಿದ್ಯಾರ್ಥಿ ಒಕ್ಕೂಟದ ಆಶ್ರಯದಲ್ಲಿ ವಿದ್ಯಾರ್ಥಿಗಳು ತರಗತಿಯನ್ನು ಬಹಿಷ್ಕರಿಸುವ ಮೂಲಕ ರೈತರ ಚಳುವಳಿಗೆ ತಮ್ಮ ಬೆಂಬಲ ವ್ಯಕ್ತಪಡಿಸಿದರು.

### ವಿಶೇಷ ಘಟಕ ಯೋಜನೆ: ಜಿಲ್ಲೆಗೆ ೨.೫೮ ಲಕ್ಷರೂ.

೧೯೮೪-೮೫ರಲ್ಲಿ ವಿಶೇಷ ಘಟಕ ಯೋಜನೆಯನ್ವಯ ಜಿಲ್ಲೆಯ ೩೯೨ ಜನ ಪರಿಶಿಷ್ಟ ಜಾತಿಯವರಿಗೆ ಕೃಷಿ ಅಭಿವೃದ್ಧಿಗಾಗಿ ೨.೫೮ ಲಕ್ಷ ರೂ. ಮಂಜೂರಾಗಿದೆ.

## ಜಿಲ್ಲಾ ಸಹಕಾರ ಅಧಿಕಾರಿಗಳಿಂದ ಬೆಟ್ಟಗೆರೆ ಸಹಕಾರ ಸಂಘದ ವ್ಯವಹಾರ ತನಿಖೆ

(ನಮ್ಮ ಪ್ರತಿನಿಧಿಯಿಂದ)

**ಶೃಂಗೇರಿ: ಇಲ್ಲಿಗೆ ಸಮೀಪದ ಬೆಟ್ಟಗೆರೆ ಸೇವಾ ಸಹಕಾರ ಸಂಘದ ವ್ಯವಹಾರಗಳ ಬಗ್ಗೆ ಸೆ. ೨೧ ರಂದು ತನಿಖೆ ನಡೆಸಿದ ಜಿಲ್ಲಾ ಸಹಕಾರ ಅಧಿಕಾರಿಗಳು ತೀವ್ರ ಅಸಂತೋಷ, ಜಿಗುಪ್ಸೆ ವ್ಯಕ್ತಪಡಿಸಿದರು.**

ಸೆ. ೨೦ರಂದು ನೆಮ್ಮಾರು ಜನ ಸಂಪರ್ಕ ಸಭೆಯಲ್ಲಿ ಈ ಸಂಘದ ವಿಷಯ ಪ್ರಸ್ತಾಪಿಸಿದ ಸದಸ್ಯರನ್ನು ಆಕ್ಷೇಪಣೆಗೆ ಗುರಿಮಾಡಿದ ಬಗ್ಗೆ ತಮ್ಮ "ತಪ್ಪಿನ ಅರಿವಾಗಿದೆ" ಎಂದು ವಿಷಾದ ಸೂಚಿಸಿದರು.

ಮೀಟಿಂಗಿಗೆ ಗೈರು ಹಾಜರಾಗುವಷ್ಟು ಹದ್ದು ಮೀರಿ ಹೋಗಿರುವ ಕಾರ್ಯದರ್ಶಿಯ ಬಗ್ಗೆ ಸದಸ್ಯರೇ ನೇರ ಕ್ರಮ ತೆಗೆದುಕೊಳ್ಳುವಂತೆ ಸೂಚಿಸಿದರು.

ಆಡಳಿತಾಧಿಕಾರಿ ಮತ್ತು ಆಡಳಿತ ಸಮಿತಿಯ ಗಮನಕ್ಕೇ ಬಾರದೆ ೩೫ ಸಾವಿರ ರೂ. ಸಾಲ ಕೊಟ್ಟಿರುವುದು ಬಹಳ ಕಾನೂನು ಬಾಹಿರ ಕ್ರಮವಾಗಿದ್ದು, "ಕೂಡಲೇ ಅದನ್ನು ಸರಿಪಡಿಸಿ; ಜೈಲಿಗೆ ಹೋಗುವ ಪರಿಸ್ಥಿತಿ ಬೇಡ" ಎಂದರು.

ತನಗೆ ಜಿಲ್ಲೆಯಲ್ಲಿ ೪೦೦ ಸಹಕಾರ ಸಂಘಗಳ ಮೇಲ್ವಿಚಾರಣೆಯಿದ್ದು, ಎಲ್ಲವನ್ನೂ ಖುದ್ದಾಗಿ ಪರಿಶೀಲಿಸಲು ಆಗುತ್ತಿಲ್ಲವೆಂದು ತಮ್ಮ ಅಸಹಾಯಕತೆ ತೋಡಿಕೊಂಡರು.

## ಹುಲಿ ಕಾಟ: ಪ್ರಾಣ ರಕ್ಷಣೆಗೆ ಮೊರೆ

ಕೊಪ್ಪ: ಈ ತಾಲ್ಲೂಕಿನ ಬೆಳವಿನಕೊಡಿಗೆ ಗ್ರಾಮ ಪಂಚಾಯ್ತಿ ಸರಹದ್ದಿನಲ್ಲಿ ವಿಪರೀತ ಹೆಚ್ಚಿರುವ ಹುಲಿ ಕಾಟದಿಂದ ನಾಗರೀಕರ ಮತ್ತು ಶಾಲಾ ಮಕ್ಕಳ ಪ್ರಾಣವುಳಿಸುವಂತೆ ಅಧಿಕಾರಿಗಳಲ್ಲಿ ಮೊರೆಯಿಡಲಾಗಿದೆ.

ಭಾಜಪದ ಶೃಂಗೇರಿ ಕ್ಷೇತ್ರೀಯ ಸಮಿತಿ ಸದಸ್ಯ ಕೆ. ಚಂದ್ರಶೇಖರ ಜೋಯಿಸ್ ಅವರು ಕೊಪ್ಪದ ಅರಣ್ಯಾಧಿಕಾರಿಗಳಿಗೂ ಜಿಲ್ಲಾಧಿಕಾರಿಗಳಿಗೂ ಸಲ್ಲಿಸಿರುವ ತುರ್ತು ಮನವಿಯಲ್ಲಿ, ಸದರಿ ಗ್ರಾಮಗಳಲ್ಲಿ ಈಗ್ಗೆ ೨ ತಿಂಗಳಿಂದ ಹಾವಳಿ ಎಬ್ಬಿಸಿರುವ ಹುಲಿಗಳು ಈಗಾಗಲೇ ಕೆಲವು ಜಾನುವಾರುಗಳನ್ನು ಕೊಂದು ಹಲವನ್ನು ಗಾಯಗೊಳಿಸಿವೆ. ಅಲ್ಲೆಲ್ಲ ತುಂಬ ಉಡಿ ಬೆಳೆದಿದ್ದು, ಮನೆಗಳು ಮತ್ತು ಶಾಲೆ ಬಹಳ ದೂರದೂರದಲ್ಲಿರುವುದಲ್ಲದೆ, ಹುಲಿಗಳು ಹಗಲಲ್ಲೂ ಕಾಣಿಸಿಕೊಳ್ಳುತ್ತಿರುವುದರಿಂದ ಹಳ್ಳಿಗರೂ ಶಾಲಾ ಮಕ್ಕಳೂ ಓಡಾಡಲು ಜೀವಭಯ ಪಡುವಂತಾಗಿದೆ ಎಂದು ತಿಳಿಸಿದ್ದಾರೆ.

ಆದ್ದರಿಂದ ಅಧಿಕಾರಿಗಳು ಕೂಡಲೇ ಇತ್ತ ಗಮನ ಹರಿಸಿ, ಹುಲಿಗಳು ನರಬಲಿ ಕೊಳ್ಳುವ ಮೊದಲೇ ಅವುಗಳಿಂದ ರಕ್ಷಣೆ ಒದಗಿಸಬೇಕೆಂದು ಅವರು ಒತ್ತಾಯಿಸಿದ್ದಾರೆ.

### ಜಿಲ್ಲಾ ಅಡಿಕೆ ಬೆಳೆಗಾರರ ಸಂಘದ ವಾರ್ಷಿಕ ಸಭೆ

ಕೊಪ್ಪ: ಚಿಕ್ಕಮಗಳೂರು ಜಿಲ್ಲಾ [illegible] ಬೆಳೆಗಾರರ ಸಂಘದ [illegible] ಸರ್ವ ಸದಸ್ಯರ ಸಭೆ ಅ. [illegible] ಗಂಟೆಗೆ ಇಲ್ಲಿನ ಪುರಭವನದಲ್ಲಿ [illegible] ತ್ತದೆ. ಅಡಿಕೆ ಬೆಳೆಗಾರರು ಹೆಚ್ಚಿ[illegible] ಯಲ್ಲಿ ಭಾಗವಹಿಸಲು ಕೋರಲಾಗಿದೆ.

ಒಂದು ಅಪರೂಪದ ಪ್ರಸಂಗ :

# ಪೋಲೀಸ್ ಠಾಣಾಧಿಕಾರಿಗೇ ದಂಡ

ತರೀಕೆರೆ: ಕಡೂರು ತಾಲ್ಲೂಕಿನ ಶಿವನಿಯಲ್ಲಿ ಕೆಲ ಸಮಯದ ಹಿಂದೆ ನಡೆದ ಗಲಭೆಯ ಸಂಬಂಧದಲ್ಲಿ ನಿಂಗಪ್ಪ ಎಂಬವರು ಹೂಡಿದ್ದ ಖಾಸಗಿ ಮೊಕದ್ದಮೆಯಲ್ಲಿ, ಅಜ್ಜಂಪುರ ಠಾಣಾಧಿಕಾರಿ ಲಕ್ಕಪ್ಪಗೌಡ ಎಂಬವರಿಗೆ ೨೦೦ರೂ. ದಂಡ ವಿಧಿಸಿ ಇಲ್ಲಿನ ಮುನ್ಸೀಫ್ ನ್ಯಾಯಾಧೀಶರು ತೀರ್ಪಿತ್ತಿದ್ದಾರೆ.

ಇವರ ಜೊತೆಗೆ ಒಬ್ಬ ದಫೇದಾರ್ ಮತ್ತು ಒಬ್ಬ ಪೇದೆಗೆ ತಲಾ ೨೦೦ ರೂ. ದಂಡ, ತಪ್ಪಿದರೆ ೧೫ ದಿನ ಸಾದಾ ಸಜೆ ವಿಧಿಸಿದ್ದಾರೆ.

ಪೋಲೀಸ್ ಅಧಿಕಾರಿಗಳು ಕಾನೂನಿನ ಮಿತಿ ಮೀರಿ ವರ್ತಿಸಿದಾಗ, (ಇದೇನೂ ಅಪರೂಪವಲ್ಲ!) ಅವರ ಮೇಲೆ ಮೊಕದ್ದಮೆ ಹೂಡುವ ಸಾಮರ್ಥ್ಯ ಇದ್ದಲ್ಲಿ ಅವರನ್ನೂ ಶಿಕ್ಷೆಗೆ ಗುರಿಪಡಿಸಲು ಸಾಧ್ಯ ಎಂಬುದಕ್ಕೆ ಇದೊಂದು ನಿದರ್ಶನ. ಅಪರೂಪದ್ದು ಅಷ್ಟೆ.

## ನಾದೆಂಡ್ಲ 'ದರ್ಬಾರು'

ಭಾರೀ ಪ್ರಜಾಪ್ರಭುತ್ವವೆಂದು ಬಡಾಯಿ ಹೊಡಕೊಳ್ಳುವ ನಮ್ಮ ಒಳಗಿನ ಕುರೂಪವನ್ನು ಜಗತ್ತಿಗೆ ಬಿಚ್ಚಿ ತೋರಿಸುವಂಥ ಹಾಗೂ ವಿಶ್ವಸಮುದಾಯದೆದುರು ಭಾರತೀಯರನ್ನು ಅಪಹಾಸ್ಯಕ್ಕೆ ಮತ್ತು ನಾಚಿಕೆಗೇಡಿಗೆ ಗುರಿ ಮಾಡಿದಂಥ ಹೀನ ವಿಧಾನದಿಂದ ಒಂದು ತಿಂಗಳ ಕಾಲ ಆಂಧ್ರದ 'ಮುಖ್ಯಮಂತ್ರಿ' ಎನ್ನಿಸಿಕೊಂಡ ನಾದೆಂಡ್ಲ ಭಾಸ್ಕರರಾವ್ ಕಡೆಗೂ ಧೂಳು ನೆಕ್ಕುವಂತಾಯಿತಷ್ಟೆ. ಕೆಲವು ಗಟ್ಟಿ ನಿರ್ಧಾರಗಳ, ಅಷ್ಟೇ ಹುಂಬತನ ಮತ್ತು ಮೂಢನಂಬಿಕೆಯ ಗೂಡಾದ ಎನ್.ಟಿ. ರಾಮರಾವ್ ಮತ್ತೆ ಅಧಿಕಾರಕ್ಕೆ ಬಂದೂ ಆಯಿತಷ್ಟೆ.

ಆ ನಾದೆಂಡ್ಲ ತಾನು ಅಧಿಕಾರ ಹಿಡಿಯುತ್ತಿದ್ದಂತೆ ಮಾಡಿದ ಮೊಟ್ಟ ಮೊದಲ 'ಘನಂದಾರಿ' ಕೆಲಸವೆಂದರೆ ಐ.ಎ.ಎಸ್., ಐ.ಪಿ.ಎಸ್. ಅಧಿಕಾರಿಗಳ ವರ್ಗಾವರ್ಗಿ ಮತ್ತು ೨೦ಕ್ಕೂ ಹೆಚ್ಚು ಸರ್ಕಾರಿ ನಿಗಮಗಳಿಗೆ ತನ್ನ ಬೆಂಬಲಿಗರನ್ನು ಅಧ್ಯಕ್ಷರನ್ನಾಗಿ ಮಾಡಿದ್ದು. ಎನ್.ಟಿ.ಆರ್. ಅಧಿಕಾರಕ್ಕೆ ಬಂದೊಡನೆ ಈ ಎಲ್ಲ ವರ್ಗಾವಣೆ ಮತ್ತು ನೇಮಕಗಳನ್ನೂ ರದ್ದು ಪಡಿಸಿದ್ದಾರೆ.

## ಸುದ್ದಿ ವಿಶೇಷ

# ಬರಲಿದೆ ಸಾಂಕ್ರಾಮಿಕ ಕ್ಯಾನ್ಸರ್!

ಭಾರತ, ಚೀನಾಗಳೂ ಸೇರಿದಂತೆ 'ಅಭಿವೃದ್ಧಿಶೀಲ ರಾಷ್ಟ್ರ'ಗಳೆನ್ನಿಸಿಕೊಳ್ಳುವ ಮೂರನೇ ಜಗತ್ತಿನ ಎಲ್ಲ ದೇಶಗಳಲ್ಲೂ ದಿನೇ ದಿನೇ ತೀವ್ರ ರೀತಿಯಲ್ಲಿ ಹೆಚ್ಚುತ್ತಿರುವ ಸಿಗರೇಟ್ ಸೇವನೆಯಿಂದಾಗಿ ಶ್ವಾಸಕೋಶ ಕ್ಯಾನ್ಸರ್‌ನ ಭಾರೀ ಸಾಂಕ್ರಾಮಿಕ ರೋಗ ಉಲ್ಬಣಗೊಳ್ಳಲಿದೆ ಎಂದು ಜಾಗತಿಕ ಆರೋಗ್ಯ ಸಂಸ್ಥೆಯ ತಜ್ಞರ ವರದಿ ಎಚ್ಚರಿಸಿದೆ. ಸಿಗರೇಟಿನ ಬಗ್ಗೆ ಆಕರ್ಷಕವಾದ, ಪ್ರೀತಿ ಹುಟ್ಟಿಸುವ ಹಾಗೂ ಯುವಕರನ್ನು ಭ್ರಮಾಲೋಕಕ್ಕೆ ತಳ್ಳುವ ಜಾಹೀರಾತು ಪ್ರಚಾರದಿಂದ ಈ ದೇಶಗಳಲ್ಲಿ ಹದಿನೆಂಟರಿಂದ ಇಪ್ಪತ್ತರೊಳಗಿನ ತರುಣರೂ ಈ ಚಟಕ್ಕೆ ಬಲಿಯಾಗುತ್ತಿದ್ದಾರೆ. ಜಾಹೀರಾತಿಗಾಗಿ ಕೋಟಿಗಟ್ಟಲೆ ಹಣ ಸುರಿಯಲಾಗುತ್ತಿದೆ.

ಈಗಾಗಲೇ ಎಲ್ಲ ದೇಶಗಳ ವಯಸ್ಕರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಒಂದಿಲ್ಲೊಂದು ರೀತಿ ತಂಬಾಕು ಸೇವನೆ ಚಟಕ್ಕೆ ಬಲಿಯಾಗಿದ್ದಾರೆ.

ಶ್ವಾಸಕೋಶದ ಕ್ಯಾನ್ಸರ್‌ಗೆ ತುತ್ತಾದ ಸುಮಾರು ೬ ಲಕ್ಷ ರೋಗಿಗಳು ಈಚೆಗೆ ಆಸ್ಪತ್ರೆಗಳಿಗೆ ದಾಖಲಾಗಿದ್ದಾರೆ. ೧೦ ಲಕ್ಷಕ್ಕೂ ಹೆಚ್ಚು ಜನ ಅಕಾಲಮರಣಕ್ಕೀಡಾಗಿದ್ದಾರೆ.

ತಂಬಾಕಿನ ಉತ್ಪಾದನೆ ವಿಪರೀತ ಹೆಚ್ಚುತ್ತಿದ್ದು ನೂರಿಪ್ಪತ್ತು ರಾಷ್ಟ್ರಗಳು ತಂಬಾಕು ಬೆಳೆಯುತ್ತಿವೆ. ವಿಶ್ವದ ತಂಬಾಕು ಉತ್ಪಾದನೆಯಲ್ಲಿ ಮೂರನೇ ಜಗತ್ತಿನ ರಾಷ್ಟ್ರಗಳೇ ಶೇ. ೬೩ರಷ್ಟು ಬೆಳೆಯುತ್ತಿವೆ ಎಂದು ವರದಿ ಉಲ್ಲೇಖಿಸಿದೆ.

ಸಿಗರೇಟ್ ಕಂಪೆನಿಗಳು ಬಹುರಾಷ್ಟ್ರೀಯ ಗುತ್ತೇದಾರಿ ಕಂಪೆನಿಗಳಾಗಿರುವುದು; ನಮ್ಮಂಥ ದೇಶಗಳ ಸರ್ಕಾರಗಳು ವಿದೇಶಿ ವಿನಿಮಯ ಗಳಿಕೆಯ ನೆಪದಲ್ಲಿ (ಆಹಾರ ಧಾನ್ಯ ಬೆಳೆಯಬೇಕಾದ ಕೃಷಿ ಭೂಮಿಯ

(೩ನೇ ಪುಟಕ್ಕೆ)

## ವಿವೇಚನೆಯಿಲ್ಲದೆ ಮಕ್ಕಳ ಹಲ್ಲು ಕಿತ್ತು ಮುಖ ಊದಿಸಿದರು!

ಸಕಲೇಶಪುರದ ಲಯನ್ಸ್ ಕ್ಲಬ್ ಏರ್ಪಡಿಸಿದ್ದ ಕಾರ್ಯಕ್ರಮವೊಂದರಲ್ಲಿ ಅಲ್ಲಿನ ಕ್ರಾಫರ್ಡ್ ಆಸ್ಪತ್ರೆಯ ದಂತ ವೈದ್ಯ ನಾಣಯ್ಯ ಅವರು ವಿವೇಚನೆಯಿಲ್ಲದೆ ೩೦ ಮಕ್ಕಳಿಗೆ ಹಲ್ಲು ಕಿತ್ತಿದ್ದಾಗಿ ವರದಿಯಾಗಿದೆ. ಆ ಪೈಕಿ ೨೦ ಮಕ್ಕಳ ಮುಖಗಳು ಊದಿಕೊಂಡು, ಅವರೆಲ್ಲ ತತ್ತರಿಸಿ ಹೋಗಿದ್ದಾರೆಂದೂ ಪೋಷಕರು ಪೋಲೀಸರಿಗೆ ದೂರಿತ್ತಿರುವುದಾಗಿಯೂ ವರದಿಯಾಗಿದೆ.

## ಮನುಷ್ಯ ಕುಡಿಯಲು ಯೋಗ್ಯವಲ್ಲದ ನೀರು ಕುಡಿವ ಕಾಫಿ ಕಾರ್ಮಿಕರು

ಕರ್ನಾಟಕದ ಹಲವು ಕಾಫಿ ತೋಟಗಳಲ್ಲಿ ಮನುಷ್ಯರು ಕುಡಿಯಲು ಯೋಗ್ಯವಲ್ಲದ ನೀರನ್ನೇ ಕಾರ್ಮಿಕರು ಕುಡಿಯಬೇಕಾಗಿದೆಯೆಂದು ಕೇಂದ್ರ ಸರ್ಕಾರದ ಕಾರ್ಮಿಕ ಇಲಾಖೆಯ ಅಧ್ಯಯನವೊಂದರಿಂದ ವ್ಯಕ್ತಪಟ್ಟಿದೆ. ಲೆಕ್ಕದ ಪ್ರಕಾರ ರಾಜ್ಯದ ಕಾಫಿ ತೋಟಗಳಲ್ಲಿ ೨ ಲಕ್ಷ ೧೯ ಸಾವಿರ ಕಾರ್ಮಿಕರು ದುಡಿಯುತ್ತಿದ್ದಾರೆ. ಬಹುಶಃ ಇದರಲ್ಲಿ ಖಾಯಂ ಅಲ್ಲದ ಚೆಂಗೂಲಿ ಕಾರ್ಮಿಕರ ಬಹುದೊಡ್ಡ ಸಂಖ್ಯೆ ಸೇರಿರಲಿಕ್ಕಿಲ್ಲ.

ಕೇರಳ ಮತ್ತು ತಮಿಳುನಾಡಿನಲ್ಲಿ ಮಾಹಿತಿ ಸಂಗ್ರಹಿಸಲಾದ ಎಲ್ಲ ತೋಟಗಳಲ್ಲಿ ಕುಡಿಯುವ ನೀರಿನ ಮೂಲ ಪ್ರಮಾಣೀಕೃತವಾಗಿದ್ದರೆ, ಕರ್ನಾಟಕದಲ್ಲಿ ಶೇ .೪೦ರಷ್ಟು ಎಸ್ಟೇಟ್‌ಗಳಲ್ಲಿ ಪ್ರಮಾಣೀಕೃತವಲ್ಲದ ನೀರು ಪೂರೈಕೆ ಇತ್ತು.

ಸಣ್ಣ ಕಾಫಿ ತೋಟಗಳ ಸಂಖ್ಯೆ ಆ ಎರಡು ರಾಜ್ಯಗಳಿಗಿಂತ ನಮ್ಮಲ್ಲಿ ಹೆಚ್ಚಾಗಿರುವುದು ನೀರು ಪೂರೈಕೆ ದೋಷಕ್ಕೆ ಕಾರಣ ಎಂದು ಹೇಳಲಾಗಿದೆ. ಆದರೆ, ಎಷ್ಟೇ ಸಣ್ಣ ಎಸ್ಟೇಟ್ ಆದರೂ ಕುಡಿಯುವ ನೀರಿಗೆ ವ್ಯವಸ್ಥೆ ಮಾಡಿಕೊಳ್ಳಲಾರದಷ್ಟು ದರಿದ್ರವೆ? —ಅದರಲ್ಲೂ ಸಾಮಾನ್ಯವಾಗಿ ಕಾಫಿ ತೋಟಗಳಲ್ಲಿ ಎಲ್ಲೆಲ್ಲೂ ಯಥೇಚ್ಛವಾಗಿ ಶುದ್ಧ ಹರಿವ ನೀರು ದೊರೆಯುವಾಗ—ಎಂಬುದು ಯೋಚಿಸಬೇಕಾದ ಪ್ರಶ್ನೆ.

# ಗಾಂಧೀಜಿ ಭಾರ ....

ಮತ್ತೊಮ್ಮೆ ಗಾಂಧೀ ಜಯಂತಿ ಬಂದಿದೆ.

ಅಂದರೆ ಪುನಃ ಶುರು — ಹಬ್ಬ, ಪೂಜೆ, ಉತ್ಸವ, ಪಾರಾಯಣದಂತೆ ದಿನಾಚರಣೆ, ಫೋಟೋ ಮೆರವಣಿಗೆ, ಭಾಷಣ ....

ಎಲ್ಲ ಮುಗಿಸಿ ಮತ್ತೆ ಅದೇ ಕ್ರೂರ ಚಿಂತನೆಗಳು, ಅವೇ ಕಳ್ಳ ಮಾರ್ಗಗಳು, ಅವೇ ಸುಳ್ಳು-ಅಪ್ರಾಮಾಣಿಕತೆಗಳು ....

ಗಾಂಧೀಜಿ ಈ ದೇಶದ ಜನಕ್ಕಾಗಿ – ಅಷ್ಟೇ ಏಕೆ, ಇಡೀ ಮನುಷ್ಯ ಕುಲಕ್ಕಾಗಿ– ಚಿಂತಿಸಿದರು, ಕಣ್ಣು-ಕಿವಿ ತೆರೆದಿಟ್ಟುಕೊಂಡು ನೋಡಿ-ಕೇಳಿ ತಿಳಿದರು, ದೇಹ ಸವೆಸಿ ದುಡಿದರು. ಅವರ 'ದೌರ್ಬಲ್ಯ'ಗಳ ಪಟ್ಟಿ ಇದೆ, ಅವರ 'ತಪ್ಪು' ಯೋಚನೆ-ಕೃತ್ಯಗಳ ಲೆಕ್ಕ ಇದೆ; ಆದರೆ ಅವರು ಈ ದೇಶದ ಸಮಸ್ತ ಜನರಿಗಾಗಿ — ಹಿಂದು, ಮುಸ್ಲಿಂ, ಕ್ರೈಸ್ತ .... ಸ್ಪೃಶ್ಯ, ಅಸ್ಪೃಶ್ಯ, .... ಪಟ್ಟಣಿಗ, ಹಳ್ಳಿಗ, .... ಎಲ್ಲರಿಗಾಗಿ ಪಟ್ಟ ಕಾಳಜಿಯ, ಮಾಡಿದ ತ್ಯಾಗದ ವರ್ಣನೆ ಮಾತ್ರ ಹೇಬರ ನೆನಪಿನಲ್ಲೇ ಮಾಸಿ ಅಳಿಯುತ್ತಿದೆ.

ಗಾಂಧೀಜಿಯ ಬೋಧನೆ, ಮಾರ್ಗದರ್ಶನಗಳನ್ನು ಧಿಕ್ಕರಿಸುವ, ಆದರೂ ಅವರ ಹೆಸರು ಹೇಳಿಕೊಂಡೇ ಸ್ಥಾನಮಾನ ಗಿಟ್ಟಿಸಿ ಗಟ್ಟಿ ಮಾಡಿಕೊಳ್ಳುವ ಪರಂಪರೆ ನೆಹರೂರಿಂದಲೇ ಆರಂಭವಾಯಿತೆಂಬುದು ಈಗಾಗಲೇ ಸ್ಥಿರಪಟ್ಟಿದೆ. ಅದೇ ಇಂದು ಬೃಹದಾಕಾರವಾಗಿ ಸರ್ವವ್ಯಾಪಿಯಾಗಿ ಬೆಳೆದಿದೆ.

ಅದರ ಪರಿಯನ್ನೇ ಕವಿತೆಯಾಗಿಸಿದ ಒಂದು ವರ್ಣನೆ ಇಲ್ಲಿದೆ. ನಮ್ಮ ಪತ್ರಿಕೆಯ ೧೯೭೨ರ ಗಾಂಧೀ ಜಯಂತಿ ಸಂಚಿಕೆಯಲ್ಲಿ ಪ್ರಕಟವಾಗಿದ್ದನ್ನು ಈಗ ಮತ್ತೊಮ್ಮೆ ಪ್ರಕಟಿಸುತ್ತಿದ್ದೇವೆ. **—ಸಂಪಾದಕ.**

ಗಾಂಧಿ, ಹೊರಲಾರೆವಯ್ಯ
ನೀ ಬಿಟ್ಟು ಹೋದ
ಹೆಣ ಭಾರವನ್ನ
ಮಾತು ಮಾತಿಗೆ
ಊರು ಊರಿಗೆ
ಬೆದೆ ಬರುವ
ನಿನ್ನ ಹೆಸರನ್ನ
ನಿನ್ನನ್ನು ಕೊಂದವನು
ನಿನ್ನ ಹೆಸರನ್ನು ಕೊಲ್ಲದೆ
ದಿನ ದಿನವೂ ನಿನ್ನ
ಹೆಸರು ಬಸಿರಾಗು
ವಂತೆ ಮಾಡಿ
ಆ
ಎಲ್ಲ ಪಿಂಡ
ಗಳನ್ನು ಸಾಕುವ
ಬೆಳೆಸುವ
ಅವುಗಳನ್ನು ಸಹಿಸಿ
ತತ್ತಿ ಹಾಕುವ
ಭಂಡ ಚಾಕರಿಯ
ಹೊರೆಯನ್ನ
ಹೊರಲಾರೆವಯ್ಯ
ನಿನ್ನ ಕೀರುತಿ ನಾಟಕ
ಕಂಪನಿಯಾಗಿ
ಮೈಕಾಗಿ
ಹರಿಜನೋದ್ಧಾರವಾಗಿ
ಪಾನ ಮಂದಿರವಾಗಿ
ಖಾದಿಯ ಖಂಡವಾಗಿ
ಹವನ ಹೋಮಗಳಾಗಿ
ಮಹಾ ಮಜ್ಜನವಾಗಿ
ತೊಟ ತೊಟನೆ
ಇಳಿಯುತ್ತಾ; ಮತ್ತೆ
ಅಂಡ ಪಿಂಡಗಳಾಗಿ
ಚಪ್ಪಾಳೆಯಾಗಿ
ಕಿವಿಯಿಂದ ಬಾಯಾಗಿ
ಒಮ್ಮಿಂದೊಮ್ಮೆಲೇ
ಚಂಡಿ ಚಾಮುಂಡಿಯಾಗಿ
ಛಡಿಯಾಗಿ ಆಡುತ್ತ
ಮೈಮೇಲೆ ಓಡಾಡಿ
ನೆಕ್ಕುವ ಮುಳ್ಳು ನಾಲಿಗೆ
ಯಾಗಿ, ಪುಳಕಗೊಳ್ಳುತ್ತಿರುವ
ನಿನ್ನ ಹೆಸರಿನ ಭಾರವನ್ನ
ಹೊರಲಾರೆವಯ್ಯ
ನಾವು ಹೊರಲಾರೆವು

**—ಎಸ್. ಎಸ್. ವಿಶ್ವೇಶ್ವರ, ಎಂ. ಎ.**

## ಓದುಗರ ಪತ್ರಗಳು

# ಅಡಿಕೆ ಬೆಳೆಗೆ ಮಾರಕವಾಗುತ್ತಿರುವ ಕಾಡುಹಂದಿಗಳ ಹಾವಳಿ ಚರ್ಚಿತವಾಗಲಿ

ಮಾನ್ಯರೆ,

ಇದೇ ಅಕ್ಟೋಬರ್ ೮-೯ರಂದು ಶೃಂಗೇರಿಯಲ್ಲಿ ಅಡಿಕೆ ಬೆಳೆಯ ಬಗ್ಗೆ ವಿಚಾರ ಸಂಕಿರಣವೊಂದನ್ನು ಏರ್ಪಡಿಸಿರುವ ವಿಷಯ ಈಗಾಗಲೇ ಎಲ್ಲೆಡೆಗೂ ಹಬ್ಬಿದೆ. ಅಡಿಕೆ ಕೃಷಿಯನ್ನೇ ಅವಲಂಬಿಸಿಕೊಂಡು ಸರಕಾರದ ಅಲಕ್ಷ್ಯಕ್ಕೆ ತುತ್ತಾಗಿರುವ ಅಡಿಕೆ ಬೆಳೆಗಾರರೇ ತುಂಬಿರುವ ಈ ಮೂರು ತಾಲ್ಲೂಕುಗಳ ರೈತರ ಅತಿ ಸಮೀಪದಲ್ಲಿಯೇ ಕೃಷಿ ವಿ.ವಿ.ನಿಲಯದ ತಜ್ಞರೂ, ಇನ್ನಿತರ ಗಣ್ಯರೂ ಆಗಮಿಸಿ ವಿಚಾರ ವಿನಿಮಯ ನಡೆಸುವುದು ಸಂತಸದ ಸಂಗತಿ. ಅತ್ಯಗತ್ಯವಾದ ಕಾರ್ಯ.

ಅಡಿಕೆ ಬೆಳೆಗಾರರಿಗೆ ನೂರಾರು ಬಗೆಯ ಸಮಸ್ಯೆಗಳಿದ್ದು ಅವೆಲ್ಲವುಗಳ ಜೊತೆಗೆ ಇತ್ತೀಚೆಗೆ ಆರಂಭವಾದ, ಭಾರೀ ಹಾನಿಕರವಾದ **ಕಾಡುಹಂದಿ ಹಾವಳಿ**ಯ ತಡೆಗೆ ಸೂಕ್ತ ಕ್ರಮ ತೆಗೆದುಕೊಳ್ಳುವ ಮತ್ತು ನಷ್ಟ ತುಂಬುವ ಬಗೆಗೆ ಏನಾದರೂ ಕ್ರಮ ಕೈಗೊಳ್ಳಬಹುದಾದ ಸೂಚನೆ ಕಂಡುಬರಬೇಕಾಗಿದ್ದು ಅತೀ ಅಗತ್ಯ. ಏನಿಲ್ಲವೆಂದರೂ, ಕೊಪ್ಪ, ಶೃಂಗೇರಿ, ನರಸಿಂಹರಾಜಪುರ, ಮೂಡಿಗೆರೆ ತಾಲ್ಲೂಕುಗಳಿಂದ ಒಟ್ಟು ಈ ಐದು ವರ್ಷಗಳಲ್ಲಿ ಕನಿಷ್ಠ ೫೦ ಲಕ್ಷ ಸಸಿಗಳು ಕಾಡು ಹಂದಿಗಳಿಂದ ನಾಶವಾಗಿರಬಹುದು. ಕೊಳೆರೋಗ, ಚಂಡಮಾರುತ, ಶೀತಮಾರುತ, ಹಿಡಿಮುಂಡಿಗೆ, ಹಳದಿಎಲೆ ರೋಗ – ಈ ಯಾವುದಕ್ಕಿಂತಲೂ ಹೆಚ್ಚಾಗಿ ಕಾಡುಹಂದಿಗಳ ಹಾವಳಿ ಅಡಿಕೆ ಬೆಳೆಯ ಭವಿಷ್ಯಕ್ಕೇ ಮಾರಕವಾಗಿರುವುದು ಗಂಭೀರವಾದ ವಿಷಯ.

ಆದ್ದರಿಂದ, ವಿಚಾರ ಸಂಕಿರಣದಲ್ಲಿ ಇದು ಪ್ರಸ್ತಾಪಕ್ಕೆ ಬಂದು ಪರಿಹಾರೋಪಾಯ ಕಂಡುಕೊಳ್ಳಲು ಮಾರ್ಗವಾಗಲೆಂದು ಆಶಿಸುತ್ತೇನೆ.

—**ಎ.ಎಸ್. ಗಣೇಶರಾವ್,**
ಅರಸೀತೋಟ.

## ಬಾವಿ ಕುಸಿದಿದೆ

ಮಾನ್ಯರೆ,

ನರಸಿಂಹರಾಜಪುರ ತಾ॥ ಕಮಲಾಪುರ ಗ್ರಾಮದ ಯಡಗೆರೆಯಲ್ಲಿ ಎರಡು ವರ್ಷಗಳ ಹಿಂದೆ ನ. ರಾ. ಪುರ ತಾ. ಅ. ಮಂಡಳಿ ೨೫ ಸಾವಿರ ರೂ. ವೆಚ್ಚದಲ್ಲಿ ಒಂದು ಬಾವಿ ನಿರ್ಮಿಸಿದ್ದು, ಅದರ ನಿರ್ಮಾಣದಲ್ಲಿ ಕಳಪೆ ಕೆಲಸ ನಡೆದ ಕಾರಣ ಆರು ತಿಂಗಳಲ್ಲೇ ಬಾವಿ ಸಂಪೂರ್ಣ ಮೇಲಿನಿಂದ ಕುಸಿದು ಬಿದ್ದು, ಹಲವಾರು ಜಾನುವಾರುಗಳ ಸಾವಿಗೆ ಕಾರಣವಾಗಿದೆ.

ಈ ಬಗ್ಗೆ ಗ್ರಾಮಸ್ಥರು ಸಂಬಂಧಪಟ್ಟವರಿಗೆ ಲಿಖಿತ ಮನವಿ ಸಲ್ಲಿಸಿದ್ದರೂ ಈವರೆಗೂ ಯಾವ ಕ್ರಮವನ್ನೂ ತೆಗೆದುಕೊಳ್ಳದಿರುವುದು ಶೋಚನೀಯ.

—ನೊಂದ ಗ್ರಾಮಸ್ಥರ ಪರವಾಗಿ,
**ಯಡಗೆರೆ ಸತ್ಯನಾರಾಯಣ.**

## ಒಳಿತು ಮಾಡಿದ ಕೆಟ್ಟ ಕೆಲಸ

ಮಾನ್ಯರೆ,

ಆಂಧ್ರದಲ್ಲಿ ತೆಲುಗುದೇಶಂನ ಒಬ್ಬ ವ್ಯಕ್ತಿ ಅಧಿಕಾರ ಪಿಪಾಸೆಯಿಂದ ಎಸಗಿದ ವಿಶ್ವಾಸದ್ರೋಹದ ಕೆಟ್ಟ ಕೆಲಸ ಆತನಿಗೆ, ಆತನ ಬಾಲ ಹಿಡಿದವರಿಗೆ ಮುಖಭಂಗ ಮಾಡಿ, ಸಮಾಜಕ್ಕೆ ಹಾಗೂ ರಾಷ್ಟ್ರಕ್ಕೆ ಒಳಿತನ್ನೇ ಮಾಡಿತೆಂಬುದು ಭಾರತದ ಪ್ರಜಾ ಪ್ರಭುತ್ವದ ಚರಿತ್ರೆಯಲ್ಲಿ ಚಿರಕಾಲ ನಿಲ್ಲುತ್ತದೆ.

**ಈ ಘಟನಾವಳಿಯಿಂದಾಗಿ,** ಹಿಂದೆ ದಿಢೀರನೆ ಅಧಿಕಾರ ಹಿಡಿದಿದ್ದ **ಎನ್.ಟಿ.ರಾಮರಾವ್** ಒಂದಿಷ್ಟು ಪಳಗಲು ಹಾಗೂ ತಮ್ಮ ನ್ಯೂನತೆ ತಿದ್ದಿಕೊಳ್ಳಲು ಅವಕಾಶ ದೊರೆಯಿತು. ಒಂದು ಕಾಲದಲ್ಲಿ ಕರ್ಣಾಟಕ - ಆಂಧ್ರಗಳ ನಡುವೆ ಇದ್ದ ಗಾಢ ಆತ್ಮೀಯತೆ ಪುನಃ ನೆಲೆಗೊಳ್ಳುವಂತಾಯಿತು. ವಿರೋಧ ಪಕ್ಷಗಳು ಇನ್ನಷ್ಟು ಒಗ್ಗೂಡುವುದು ಅನಿವಾರ್ಯವಾಯಿತು.

ಎಲ್ಲಕ್ಕಿಂತ ಮುಖ್ಯವಾಗಿ, ರಾಜಕಾರಣ ಮತ್ತು ಪ್ರೇಮ–ಇವುಗಳಲ್ಲಿ ನಿಷಿದ್ಧವಾದಂಥ ಕ್ರಿಯೆ ಯಾವುದೂ ಇಲ್ಲ ಎಂಬ ಅನುಭವದ ಮಾತಿಗನುಗುಣವಾಗಿ, ಭಾರತದಂತಹ ಭಾರೀ 'ಪ್ರಜಾ ಪ್ರಭುತ್ವ'ದ ಜವಾಬ್ದಾರಿ ಹೊತ್ತಿರುವ ವ್ಯಕ್ತಿಯೂ ಎಷ್ಟು ಕಳಪೆಯಾಗಿ ನಡೆದುಕೊಳ್ಳುತ್ತಾರೆಂಬುದು ಜಗಜ್ಜಾಹೀರಾಗಿ ಹೋಯಿತು.

—**ಹರಿಹರಪುರ ಬಿ. ಸುಬ್ರಮಣ್ಯಂ,**
ಬೆಂಗಳೂರು.

## ಸರಗಳ್ಳರಿಗೆ ಚಳ್ಳೆಹಣ್ಣು !

ಹುಬ್ಬಳ್ಳಿಯಲ್ಲಿ ಈಚೆಗೆ ಸೈಕಲ್ ಮೇಲೆ ಬಂದು ಕಾಲೇಜು ಹುಡುಗಿಯೊಬ್ಬಳ ಸರ ಕಸಿಯಲು ಯತ್ನಿಸಿದ ಕಳ್ಳನ ಕೈಯನ್ನು ಆಕೆ ಗಟ್ಟಿಯಾಗಿ ಹಿಡಿದುಕೊಂಡಾಗ ಜೊತೆಗಾತಿಯರು ಸೈಕಲ್ ಚಕ್ರದ ಗಾಳಿಬಿಟ್ಟು ಆತ ಓಡಿಹೋಗದಂತೆ ಮಾಡಿದರು. ಅಕ್ಕಪಕ್ಕದ ಜನ ನಂತರ ಆತನನ್ನು ಪೋಲೀಸರಿಗೆ ಒಪ್ಪಿಸಿದರು. ಈಚಿನ ೨-೩ ವಾರಗಳಲ್ಲಿ ಇಂಥ ೩ ಪ್ರಕರಣಗಳಲ್ಲಿ ಆಯಾ ಹುಡುಗಿಯರೇ ತಕ್ಷಣ ಕಳ್ಳನನ್ನು ಹಿಡಿದುಕೊಟ್ಟಿರುವುದು ಇದು ಎರಡನೇ ಬಾರಿ.

## ಅತ್ಯಾಚಾರ, ಕೊಲೆ ನಡೆಸಿ ಧರ್ಮಸ್ಥಳಕ್ಕೆ ಹೋದ!

ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಹಳ್ಳಿಯೊಂದರಲ್ಲಿ ಈಚೆಗೆ ಶಿವಣ್ಣ ಎಂಬವ ಕುರಿಕಾಯಲು ಹೋದ ೧೪ ವರ್ಷದ ಯುವತಿಯೊಬ್ಬಳ ಮೇಲೆ ಬಲಾತ್ಕಾರವಾಗಿ ಅತ್ಯಾಚಾರ ನಡೆಸಿದ. ಅವಳ ಪ್ರತಿಭಟನೆ ತಾಳಲಾರದೆ ಕಲ್ಲಿನಿಂದ ಜಜ್ಜಿ ಕೊಂದ. ಅವಳ ಕಿವಿಯಲ್ಲಿದ್ದ ಬಂಗಾರದ ಓಲೆಗಳನ್ನು ಕದ್ದುಕೊಂಡು ಹೊಸದುರ್ಗಕ್ಕೆ ಓಡಿ ಹೋಗಿ ಮಾರಿ, ಆ ಹಣದಿಂದ ಅದೇ ಊರಲ್ಲಿ ತನಗೆ ನಿಶ್ಚಯವಾಗಿದ್ದ ಹುಡುಗಿಗೆ ತಾಳಿ ಕೊಂಡ. ಉಳಿದ ಹಣದಲ್ಲಿ **ಧರ್ಮಸ್ಥಳಕ್ಕೆ ಯಾತ್ರೆ ಹೋದ!**

ಈಗ ಪೋಲೀಸರ ಅತಿಥಿಯಾಗಿ ಮೊಕದ್ದಮೆ ಎದುರಿಸುತ್ತಿದ್ದಾನೆ.

# ಮೇಗೂರಿನ ಪಾಲಿಗೆ 'ಸ್ವಾತಂತ್ರ್ಯ': ಸೌಲಭ್ಯಗಳಿಗಾಗಿ ಕಾದಿದ್ದೇ ಬಂತು!

**ದೇಶದ ಬೇರೆಲ್ಲ ಕುಗ್ರಾಮಗಳಂತೆ ಮೇಗೂರು ಎಂಬ ಈ ಕುಗ್ರಾಮದ ಪಾಲಿಗೂ ಸ್ವಾತಂತ್ರ್ಯ ಬಂದಿದೆ ಎಂದು ಪ್ರಚಾರ ಮಾಡತೊಡಗಿ ಮೊನ್ನೆಗೆ ೩೭ ವರ್ಷ ಆಗಿಹೋಯಿತು. ಆದರೆ, ಇಲ್ಲಿನ ಮಟ್ಟಿಗೆ ಸ್ವಾತಂತ್ರ್ಯದ ಫಲವೆಂದರೆ, ಕನಿಷ್ಠ ಸೌಕರ್ಯಗಳೂ ಇಲ್ಲದೆ ಕೊಂಪೆಯಾಗಿ ಉಳಿದಿರುವುದೇ ಆಗಿದೆ.**

ಮೇಗೂರು ಕೊಪ್ಪ ತಾ॥ ಮೇಗುಂದಾ ಹೋಬಳಿಯ ಅತ್ಯಂತ ಮೂಲೆಯಲ್ಲಿ ಶೃಂಗೇರಿ ತಾ॥ ಗೆ ಅಂಟಿಕೊಂಡು ಇದೆ. ದಟ್ಟವಾದ ಗುಡ್ಡಗಾಡು ಪ್ರದೇಶವಾಗಿದ್ದು, ಸುತ್ತಮುತ್ತ ಗಿರಿಜನರು ಬಹು ಸಂಖ್ಯೆಯಲ್ಲಿದ್ದಾರೆ. ಅಡಿಕೆ ಮತ್ತು ಕಾಫಿ ತೋಟಗಳೇ ಇಲ್ಲಿನ ಮುಖ್ಯ ಸಂಪತ್ತು ಎನ್ನಬಹುದು.

ಇಲ್ಲಿನ ಎಲ್ಲಕ್ಕಿಂತ ಮುಖ್ಯವಾದ ಮತ್ತು ಬೃಹತ್ತಾದ ಸಮಸ್ಯೆಯೆಂದರೆ, ಸಾರಿಗೆ-ಸಂಪರ್ಕದ್ದು. ಈ ಊರಿನ ಏಕೈಕ ಸಾರಿಗೆ ಸೌಕರ್ಯವೆಂದರೆ ಕೊಪ್ಪದಿಂದ ರಾತ್ರಿಯಾದ ಮೇಲೆ ಬಂದು ಬೆಳಗಾಗುವಾಗಲೇ ಹೊರಟು ಹೋಗುವ ೨ ಖಾಸಗೀ ಬಸ್ಸುಗಳು ಮಾತ್ರ. ಅವೂ ಕೂಡ ಈಗ್ಗೆ ಕೆಲ ಕಾಲದಿಂದ, ಮೊದಲು ಬರುತ್ತಿದ್ದಲ್ಲಿಂದ ಇನ್ನೂ ಒಂದೂವರೆ ಮೈಲಿ ಹಿಂದಕ್ಕೆ ದೇವಸ್ಥಾನದ ಬಳಿ ನಿಲ್ಲುತ್ತಿವೆ. ಇಡೀ ಊರಿನ ಸಂಪರ್ಕ ಸಾಧನವೆಂದರೆ ಅಂಚೆಕಚೇರಿ ಮತ್ತು ಒಬ್ಬ ಶ್ರೀಮಂತರ ಮನೆಗೆ ಇರುವ ಟೆಲಿಫೋನುಗಳು ಮಾತ್ರ. ಹೀಗಾಗಿ ಊರವರು, 'ಸಾರಿಗೆ ಸಂಪರ್ಕವೊಂದಿದ್ದರೆ ಏನೂ ಮಾಡಿಯೇವು' ಎನ್ನುವಂತಾಗಿದೆ.

ಊರಿಗೆ ಹೋಗಲು ಒಂದು ಸರಿಯಾದ ರಸ್ತೆಯೇ ಇಲ್ಲ. ಶೃಂಗೇರಿ–ಜಯಪುರ ರಸ್ತೆಯ ಕಚಿಗೆಯಿಂದ ಹೆಗ್ಗಾರು ಕೊಡಿಗೆ ಮೂಲಕ ಈ ಊರಿಗೆ ಬರುವ ಲೋಕೋಪಯೋಗಿ ರಸ್ತೆ ಈಗ್ಗೆ ಕೆಲವು ವರ್ಷಗಳ ಹಿಂದಷ್ಟೇ ಸ್ವಲ್ಪ ದೂರದವರೆಗೆ (ನಾಲ್ಕೈದು ಕಿ.ಮೀ.ಗಳಷ್ಟು) ಟಾರು ಕಂಡಿದೆಯಾದರೂ ಉಳಿದ ಭಾಗ ಸಂಪೂರ್ಣವಾಗಿ ಹಾಳು ಬಿದ್ದಿದೆ. ಈ ರಸ್ತೆ ನೋಡಿದರೆ ಇದರಲ್ಲಿ ಆ ಎರಡು ಬಸ್ಸುಗಳನ್ನಾದರೂ ಹೇಗೆ ಓಡಿಸುತ್ತಾರಪ್ಪಾ! ಎನ್ನಿಸುತ್ತದೆ.

ವಾಸ್ತವವಾಗಿ ಈ ಊರಿನ ಮೂಲಕ ಹಾಯುವ 'ಕಚಿಗೆ—ಕೊಗ್ರೆ ರಸ್ತೆ' ಲೋಕೋಪಯೋಗಿ ಇಲಾಖೆಗೆ ಸೇರಿ ಬಹಳ ಕಾಲ ಆಗಿದೆ. ಇದರಲ್ಲಿ ೧೫ ಕಿ.ಮೀ. ರಸ್ತೆ ಆಗಿದೆ. (ಆಗಿ ಈಗ ಹಾಳು ಬಿದ್ದಿದೆ ಅನ್ನಿ!) ಇನ್ನೊಂದು ೩ ಕಿ.ಮೀ. ರಸ್ತೆಗೆ ಜಲ್ಲಿ ವಗೈರೆ ಏನೂ ಆಗಿಲ್ಲ. ಈ ಭಾಗದಲ್ಲಿರುವ ಕೋಟಿ ತೋಟ ಹಳ್ಳಕ್ಕೆ ಒಂದು ಪ್ರಮುಖವಾದ ಸೇತುವೆ ಆಗಬೇಕಾಗಿದೆ. ಈಗ ಅದಕ್ಕೆ ಎರಡರಿಂದ ಎರಡೂವರೆ ಲಕ್ಷ ರೂ. ವೆಚ್ಚ ಬರಬಹುದು. ಸೇತುವೆ ಇಲ್ಲದೆ ಈ ಭಾಗದ ಹತ್ತಾರು ಹಳ್ಳಿಗಳಿಗೆ ಮಳೆಗಾಲದ ೬ ತಿಂಗಳು ದ್ವೀಪಾಂತರ ವಾಸ ಆಗುತ್ತಿದೆ. ಬೇಸಿಗೆಯಲ್ಲಿ ಹಳ್ಳಿಗರೇ ರಸ್ತೆಯನ್ನು ಅಷ್ಟಿಷ್ಟು ರಿಪೇರಿ ಮಾಡಿಕೊಂಡು ಗಾಡಿ ಓಡಾಡಿಸುತ್ತಾರೆ ಅಷ್ಟೆ.

ಈಗಿರುವ ಕಚಿಗೆ–ಮೇಗೂರು ರಸ್ತೆಗೆ ಕೆ.ಎನ್. ವೀರಪ್ಪ ಗೌಡರು ಶಾಸಕರಾಗಿದ್ದಾಗ ಆದ ಕೆಲಸ ಎಷ್ಟೋ ಅಷ್ಟೆ. ಅನಂತರ ಏನೂ ಹಣ ಮಂಜೂರಾಗಿಲ್ಲ. ತಲವಾನೆ ಬಳಿ ಒಂದು ಮೋರಿ ೨ ವರ್ಷದಿಂದಲೂ ಯಾವಾಗ ಬೇಕಾದರೂ ಬೀಳುವಂತಿದೆ. ಮನವಿ ಮಾಡಬಹುದಾದಷ್ಟೆಲ್ಲ ಮಾಡಿದ್ದರೂ ಪ್ರಯೋಜನವಾಗಿಲ್ಲ. ಬೇಗಾನೆ ರಾಮಯ್ಯನವರ ಕಾಲದಲ್ಲಿ ೨ ಸೇತುವೆಗಳಾದುವು. ಆದರೆ ಅದಕ್ಕೆ ತಗಲಿದ ಪೂರ್ತಿ ಎರಡೂ ಮುಕ್ಕಾಲು ಲಕ್ಷ ರೂ. ವೀರಪ್ಪ ಗೌಡರು ಮಂಜೂರು ಮಾಡಿಸಿದ್ದೇ. ರಾಮಯ್ಯನವರ ಕಾಲದಲ್ಲಿ ರಸ್ತೆಯ ವಾರ್ಷಿಕ ರಿಪೇರಿಗೆ ಸಹ ಹಣ ಮಂಜೂರಾದದ್ದಿಲ್ಲ ಎಂದು ಗ್ರಾಮಸ್ಥರು ಹೇಳುತ್ತಾರೆ.

**ವರ್ಷಕ್ಕೆ ೨-೩ ಕಿ. ಮೀ.ನಂತಾದರೂ ರಸ್ತೆ ನಿರ್ಮಾಣ,** ರಿಪೇರಿ ಮತ್ತು ಟಾರು ವಗೈರೆ ಮಾಡಿಸುತ್ತಾ ಹೋದರೆ ೧೫ ಕಿ.ಮೀ. ರಸ್ತೆ ಪೂರ್ಣಗೊಳಿಸುವುದು ಕಷ್ಟವಲ್ಲ. ಆದರೆ ಈ ಬಗ್ಗೆ ಈಗಿನ ಶಾಸಕ ಗೋವಿಂದ ಗೌಡರಿಂದಲೂ ಫಲ ದೊರೆತಿಲ್ಲ ಎಂದು ಗ್ರಾಮಸ್ಥರು ಬಹಳ ವಿಷಾದಪಡುತ್ತಾರೆ. ಜನತಾ ಸರ್ಕಾರದ ಮೊದಲ ವರ್ಷ ಗ್ರಾಮಸ್ಥರು 'ಹೋಗಲಿ' ಎಂದು ನುಂಗಿಕೊಂಡರು. ಆದರೆ ಎರಡನೇ ವರ್ಷದ ಕಾಮಗಾರಿಗಳ ಪಟ್ಟಿಯಲ್ಲೂ ಇಲ್ಲಿನ ಯಾವುದೇ ಕಾಮಗಾರಿ ಇಲ್ಲದ್ದು ಕಂಡಾಗ ಗ್ರಾಮಸ್ಥರಿಗಾದ ನೋವು - ನಿರಾಶೆ ಅಷ್ಟಿಷ್ಟಲ್ಲ.

ಮೇಗೂರಿಗೆ ಹಗಲಲ್ಲಿ ಇನ್ನೂ ಕನಿಷ್ಠ ೩ ಬಸ್ಸುಗಳು ಓಡಾಡಬಹುದು; ಅಲ್ಲದೆ ಪೂರ್ತಿ ರಸ್ತೆ ಆದರೆ ಕಳಸ–ಶೃಂಗೇರಿ ಮಧ್ಯೆ ಕನಿಷ್ಠ ೨-೩ ಬಸ್ಸು ಓಡಾಡಬಹುದು. ಅಷ್ಟು ಜನಸಂಖ್ಯೆ, ಓಡಾಟ ಇದೆ.

### ಜಾನುವಾರು ಆಸ್ಪತ್ರೆ

೨ ವರ್ಷದ ಹಿಂದೆ ಇಲ್ಲಿಗೆ ಒಂದು ಜಾನುವಾರು ಆಸ್ಪತ್ರೆ ಮಂಜೂರಾಗಿದೆ ಎಂದು ತಿಳಿಸಲಾಯಿತು. ಆದರೆ ಕಟ್ಟಡವಿಲ್ಲದ್ದರಿಂದ ರಾ.ಗ್ರಾ.ಉ. ಯೋಜನೆಯಲ್ಲಿ ಕಟ್ಟಡ ಕಟ್ಟಿಸಿದ್ದೂ ಆಯಿತು. ಅದಾಗಿ ೨ ವರ್ಷ ಆಗಿದೆ. ಈಗ ನೋಡಿದರೆ ಆಸ್ಪತ್ರೆ ಮಂಜೂರೇ ಆಗಿಲ್ಲ. ಇನ್ನಾದರೂ ಆಗಬೇಕು. ಈ[illegible]ಕ್ಕಾಗಿ ಶಾಸಕರು ಸರ್ಕಾರವನ್ನು ಪುನಃ ಒತ್ತಾಯಿಸಿದ್ದಾರಂತೆ.

(೪ನೇ ಪುಟಕ್ಕೆ)

## ಸಾಂಕ್ರಾಮಿಕ ಕ್ಯಾನ್ಸರ್

ಲ್ಲಿ) ತಂಬಾಕು ಬೆಳೆಗೆ ಉತ್ತೇಜನ ಕೊಡುತ್ತಿರುವುದು—ಇವನ್ನೆಲ್ಲ ಗಮನಿಸಿದರೆ ಈ ದೇಶಗಳ ಸರ್ಕಾರಗಳ ಮೇಲೆ ಈ ಕಂಪೆನಿಗಳ ಅಂದರೆ ಮುಂದುವರಿದ ದೇಶಗಳ ಹಿಡಿತ ಎಷ್ಟೆಂಬುದು ಅರ್ಥವಾಗುತ್ತದೆ. ಅದರೂ ಇವಕ್ಕೆ ಸ್ವತಂತ್ರ ಸಾರ್ವಭೌಮ ರಾಷ್ಟ್ರಗಳೆನ್ನುತ್ತೇವೆ!

## ಚಿಕ್ಕಮಗಳೂರಲ್ಲಿ ಮಹಿಳೆಯರ ಮೆರವಣಿಗೆ

...ಕ್ಕಮಗಳೂರು: ಪಟ್ಟಣದ ಹಲವಾರು ...ಜ್ವಲಂತ ಸಮಸ್ಯೆಗಳನ್ನು ಬಗೆಹರಿಸಲು ಒ...ತ್ತಾಯಿಸಿ 'ಮಹಿಳಾ ಜಾಗೃತಿ ಸಂಘ'ದ ನೇತೃತ್ವದಲ್ಲಿ ಒಂದು ಸಾವಿರ ಮಹಿಳೆಯರು ಬೃಹತ್ ಮೆರವಣಿಗೆ ನಡೆಸಿ, ಸಂಬಂಧಪಟ್ಟವರಿಗೆ ಮನವಿ ಸಲ್ಲಿಸಿದರು. ಪಟ್ಟಣದ ಇತಿಹಾಸದಲ್ಲಿ ಇದೊಂದು ಅಪೂರ್ವ ಘಟನೆಯಾಗಿದೆ.

ನೀರಿನ ಪೂರೈಕೆ ಅತಿ ಮುಖ್ಯ ಬೇಡಿಕೆಯಾಗಿದ್ದು, ಮಹಿಳೆಯರಿಗೆ ರಕ್ಷಣೆ, ಮಹಿಳಾ ಐ.ಟಿ.ಐ., ದೂರದರ್ಶನ, ಕಾರ್ಯನಿರತ ಮಹಿಳೆಯರ ಹಾಸ್ಟೆಲ್, ರೈಲು ಮಾರ್ಗ, ಇವು ಇತರ ಪ್ರಮುಖ ಬೇಡಿಕೆಗಳು.

## ಸಿ. ಪಿ. ಐ. ನೇತೃತ್ವದಲ್ಲಿ ರೈತ ಸಂಘಟನೆ

ಬಸರಿಕಟ್ಟೆ: ಇಲ್ಲಿಗೆ ಸಮೀಪದ ಬರ್ಕನಕಟ್ಟೆಯಲ್ಲಿ ಸಿ.ಪಿ.ಐ. ನೇತೃತ್ವದ ಅ. ಭಾ. ಕಿಸಾನ್ ಸಭಾಗೆ ಸೇರಿದ ಚಿಕ್ಕಮಗಳೂರು ಜಿಲ್ಲಾ ರೈತ ಸಂಘದ ಶಾಖೆ ಈಚೆಗೆ ಆರಂಭವಾಯಿತು. ದಾಯಿತಯ್ಯ, ಎಂ.ಚಿನ್ನಯ್ಯ ಮತ್ತು ಬೆಳ್ಳಯ್ಯ ಇವರುಗಳಿರುವ ಸಂಚಾಲಕ ಸಮಿತಿಯನ್ನು ರಚಿಸಲಾಯಿತು.

### ಸಾಂಸ್ಕೃತಿಕ ಮಿಲನ

ಆಗಳಗಂಡಿ: ಇಲ್ಲಿನ ನೂತನ ಸರ್ಕಾರಿ ಪ್ರೌಢಶಾಲೆಯಲ್ಲಿ ಸೆ. ೨೨ ರಂದು ಹಿಂದಿ ಅಧ್ಯಾಪಕಿ ಶ್ರೀಮತಿ ಲಲಿತಮ್ಮನವರ ಅಧ್ಯಕ್ಷತೆಯಲ್ಲಿ ವಿದ್ಯಾರ್ಥಿನಿಯರಿಂದ ಭಾವಗೀತೆ ಜನಪದ ಗೀತೆಗಳನ್ನೊಳಗೊಂಡ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು. ಹೆಚ್. ಆರ್. ಕೃಷ್ಣ ಮೂರ್ತಿ ಸ್ವಾಗತಿಸಿ, ಎಂ.ವಿ. ಗಂಗಾಧರ್ ವಂದಿಸಿದರು.

### ನಿವೃತ್ತ ನೌಕರರ ಸಂಘದ ೫ನೇ ವಾರ್ಷಿಕ ಸಭೆ

ಕೊಪ್ಪ: ರಾಜ್ಯ ನಿವೃತ್ತ ನೌಕರರ ಸಂಘದ ಕೊಪ್ಪ-ಶೃಂಗೇರಿ ಘಟಕದ ೫ನೇ ವಾರ್ಷಿಕ ಸಭೆ ಅಧ್ಯಕ್ಷ ಸಿ.ಹೆಚ್.ವಾಸುದೇವ್ ರವರ ಅಧ್ಯಕ್ಷತೆಯಲ್ಲಿ ನಡೆದು, ಕೇಂದ್ರ ಸಂಘ ರಿಟ್ ಹಾಕಲಿರುವ ೬ ವಿಷಯಗಳ ಬಗ್ಗೆ ಹಾಗೂ ಪ್ರತಿ ತಿಂಗಳ ಕೊನೇ ದಿನಾಂಕದಂದೇ ಪೆನ್ಶನ್ ಕೊಡಿಸಬೇಕೆಂದು ಸಂಬಂಧಪಟ್ಟವರನ್ನು ಒತ್ತಾಯಿಸಲು ತೀರ್ಮಾನಿಸಿತು.

ಪ್ರಸಕ್ತ ಸಾಲಿಗೆ ಪದಾಧಿಕಾರಿಗಳು:— ಸಿ.ಹೆಚ್.ವಾಸುದೇವ್(ಅಧ್ಯಕ್ಷ), ಕೆ.ಎಂ. ನರಸಿಂಹಯ್ಯ (ಉಪಾಧ್ಯಕ್ಷ), ಕೆ.ಎ. ಪಟವರ್ಧನ್ (ಖಜಾಂಚಿ), ಜಿ.ಕೆ. ಹಿರಿಯಣ್ಣಯ್ಯ(ಕಾರ್ಯದರ್ಶಿ), ವೈ.ಎಸ್.ಸುಬ್ಬರಾಯ (ಸಹ ಕಾರ್ಯದರ್ಶಿ), ಎ. ನಾಗೇಶ ಶಾಸ್ತ್ರಿ (ಲೆಕ್ಕಪರಿಶೋಧಕರು) ಮತ್ತು ೧೯ ಮಂದಿ ಸದಸ್ಯರು.

### ಅಬ್ಕಾರಿ ದಾಳಿ

ಕೊಪ್ಪ: ಹೊಸಕೊಪ್ಪದ ಬಳಿ ತಮ್ಮಡವಳ್ಳಿ ಗ್ರಾಮದ ಮುಡುಮುಡಿ ಎಂಬಲ್ಲಿ ವೆಂಕಟೇಶ ಎಂಬ ವ್ಯಕ್ತಿಯನ್ನು ಕೊಪ್ಪದ ಅಬ್ಕಾರಿ ತನಿಖಾಧಿಕಾರಿ ಮತ್ತು ಸಿಬ್ಬಂದಿ ಸೆ. ೨೯ರಂದು ಬಂಧಿಸಿ, ಕಳ್ಳಬಟ್ಟಿಗಾಗಿ ತಯಾರಿಸಿದ್ದ ೩೦ ಲೀ. ಬೆಲ್ಲದ ರಸಾಯನವನ್ನು ವಶಪಡಿಸಿಕೊಂಡು ಮುಂದಿನ ಕ್ರಮ ಜರುಗಿಸುತ್ತಿದ್ದಾರೆ.

### ಜಿಲ್ಲೆಯಲ್ಲಿ ೭೦ ಲಕ್ಷ ರೂ. ಕಾಮಗಾರಿ

ಚಿಕ್ಕಮಗಳೂರು: ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆಯನ್ವಯ ಜಿಲ್ಲೆಯಲ್ಲಿ ೭೦ ಲಕ್ಷ ರೂ.ಗಳ ವಿವಿಧ ಕಾಮಗಾರಿಗಳು ನಡೆಯುತ್ತಿವೆಯೆಂದು ಜಿಲ್ಲಾಧಿಕಾರಿಗಳು ತಿಳಿಸಿದ್ದಾರೆ.

### ಎಮ್ಮೆ ಸಾವು: ವಿಮೆಯ ಪರಿಹಾರ ಪಾವತಿಗೆ ಒತ್ತಾಯ

ಕಟ್ಟಿನಮನೆ: ಜೀತವಿಮುಕ್ತರ ಪರಿಹಾರದ ಅಂಗವಾಗಿ ಇಲ್ಲಿನ ಗುಂಡಯ್ಯ ಬಿನ್ ಸಿದ್ದಯ್ಯ ಎಂಬವರಿಗೆ ಅಕ್ಟೋಬರ್ ೮೨ರಲ್ಲಿ ೨ ಎಮ್ಮೆಗಳನ್ನು ಕೊಟ್ಟಿದ್ದು, ಅದರಲ್ಲಿ ಒಂದು ಎಮ್ಮೆ ೧೧-೫-೮೩ರಂದು ಮೇದು ಬಂದದ್ದು ಹಠಾತ್ ಕಾಯಿಲೆಯಾಗಿ ಸತ್ತಿತೆಂದೂ, ಅದರ ವಿಮಾ ಪರಿಹಾರಕ್ಕಾಗಿ ಬೇಕಾದ ದಾಖಲೆಗಳನ್ನೆಲ್ಲ ಒದಗಿಸಿ ಅಂದಿನಿಂದಲೂ ನ.ರಾ.ಪುರದ ತಾ.ಅ.ಮಂ. ಕಛೇರಿಗೆ ಅಲೆಯುತ್ತಿದ್ದರೂ ಇನ್ನೂ ಪರಿಹಾರ ಸಿಕ್ಕಿಲ್ಲವೆಂದೂ ಗುಂಡಯ್ಯ ತಿಳಿಸಿದ್ದಾರೆ.

ಸಂಬಂಧಪಟ್ಟವರು ಇನ್ನಾದರೂ ಈ ಪ್ರಕರಣವನ್ನು ತಕ್ಷಣ ಇತ್ಯರ್ಥ ಪಡಿಸಿ, ತಮ್ಮ ಋಣಭಾರವನ್ನು ಕಮ್ಮಿ ಮಾಡಬೇಕೆಂದು ಅವರು ಒತ್ತಾಯಿಸಿದ್ದಾರೆ.

### ಜಿಲ್ಲಾ ಸಾಹಿತ್ಯ ಸಮ್ಮೇಳನ, ಸ್ಮರಣ ಸಂಚಿಕೆ

ಚಿಕ್ಕಮಗಳೂರು: ಇಲ್ಲಿ ನವೆಂಬರ್ ೩ನೇ ವಾರದಲ್ಲಿ ಜಿಲ್ಲಾ ಲೇಖಕರ ಸಂಘ ಮತ್ತು ಸ್ಥಳೀಯ ಕನ್ನಡ ಸಂಘಗಳ ಆಶ್ರಯದಲ್ಲಿ ೨ ದಿನಗಳ ಕಾಲ ಜಿಲ್ಲಾ ಸಾಹಿತ್ಯ ಸಮ್ಮೇಳನ ನಡೆಯಲಿದೆ.

ಈ ಸಂದರ್ಭದಲ್ಲಿ ಹೊರ ತರಲಿರುವ ಸ್ಮರಣ ಸಂಚಿಕೆಗೆ ಕಥೆ, ಕವನ, ಚುಟುಕ, ಚೂರುಗಳನ್ನು ಕಳಿಸಲಿಚ್ಛಿಸುವವರು ಅ. ೫ ರೊಳಗೆ ಇ.ಆರ್.ಶ್ರೀಕಂಠಯ್ಯ, ೯೫, ನಾಯ್ಡು ಬೀದಿ, ಚಿಕ್ಕಮಗಳೂರು–ಇವರಿಗೆ ಕಳಿಸಲು ಕೋರಲಾಗಿದೆ.

ಇನ್ನೂ ಜಿಲ್ಲಾ ಲೇಖಕರ ಸಂಘದ ಸದಸ್ಯತ್ವ ಪಡೆಯದಿರುವ ಜಿಲ್ಲೆಯ ಉದಯೋನ್ಮುಖ ಬರಹಗಾರರು ತಮ್ಮ ಸದಸ್ಯತ್ವ ಶುಲ್ಕವನ್ನು ಬಿ.ಎ.ಜ್ವಾಲನಪ್ಪ, ಕೆ. ಜಿ. ಐ.ಡಿ., ಅಗ್ರಹಾರ, ಚಿಕ್ಕಮಗಳೂರು-ಇವರಿಗೆ ಕಳಿಸಿ ಸದಸ್ಯರಾಗಬೇಕೆಂದೂ, ಸಮ್ಮೇಳನದಲ್ಲಿ ಸಕ್ರಿಯವಾಗಿ ಭಾಗವಹಿಸಬೇಕೆಂದೂ ಸಹ ಕಾರ್ಯದರ್ಶಿ ಹುಲಿಕೆರೆ ಮಂಜುನಾಥ್ ವಿನಂತಿಸಿದ್ದಾರೆ.

## ಸೌಲಭ್ಯಗಳಿಗೆ ಕಾಯುತ್ತಿರುವ ಮೇಗೂರು

(೩ನೇ ಪುಟದಿಂದ)

### ಮಾವಿನಕಾಡು ರಸ್ತೆ

ವೀರಪ್ಪ ಗೌಡರ ಕಾಲದಲ್ಲೇ, ಮೇಗೂರಿನಿಂದ ಮಾವಿನಕಾಡು ಮೂಲಕ ಶೃಂಗೇರಿ-ಕೆರೆಕಟ್ಟೆ ರಸ್ತೆಗೆ ಹೋಗಿ ಸೇರುವ ರಸ್ತೆಯೊಂದು ಮಂಜೂರಾಗಿ ಸುಮಾರು ೪ ಕಿ.ಮೀ.ಗಳಷ್ಟು ರಸ್ತೆಯಾಗಿದೆ. 'ನಿರುದ್ಯೋಗ ನಿವಾರಣೆ ಯೋಜನೆ'ಯಡಿ ಆಗಲೇ ಅಷ್ಟಕ್ಕೂ ಜಲ್ಲಿಯೂ ಆಗಿತ್ತು. ಅಲ್ಲಿಂದ ಮಾವಿನ ಕಾಡಿಗೆ ಉಳಿದ ೩ ಕಿ.ಮೀ. ದೂರ ರಸ್ತೆಯಾಗಲೇ ಇಲ್ಲ. ಈ ರಸ್ತೆ ಪೂರ್ತಿಯಾದರೆ ಈ ಮಾರ್ಗವಾಗಿಯೂ ಸಹ ಬಸ್ಸುಗಳ ಓಡಾಟಕ್ಕೆ ವಿಪುಲ ಅವಕಾಶಗಳಿವೆ. ಅದಕ್ಕಿಂತಲೂ ಹೆಚ್ಚಾಗಿ— ಒಂದು ಬಸ್ಸಿನ ರಸ್ತೆಯನ್ನು ಕಾಣಬೇಕಾದರೆ ದುರ್ಗಮವಾದ ಐದಾರು ಮೈಲಿಗಳ ದೂರವನ್ನು ನಡೆಯಬೇಕಾಗಿರುವ ಮಾವಿನಕಾಡು ಭಾಗದ ಹತ್ತಾರು ಹಳ್ಳಿಗಳಿಗೆ ಇನ್ನಿಲ್ಲದಷ್ಟು ಪ್ರಯೋಜನವಾಗುತ್ತದೆ, ಒಂದು ಹೊಸ ಜೀವನವೇ ಸಿಕ್ಕಿದಂತಾಗುತ್ತದೆ. (ಈ ಮಾರ್ಗದಲ್ಲೂ ಒಂದು ಪ್ರಮುಖ ಸೇತುವೆ ಆಗುವುದಿದೆ.)

### ಕಿರೀಟಪ್ರಾಯ!

ಈ ಎಲ್ಲ ಸಮಸ್ಯೆಗಳಿಗೆ ಕಿರೀಟಪ್ರಾಯವಾದ ಒಂದು ಸಮಸ್ಯೆಯೆಂದರೆ ಅಡಿಕೆಗೆ ತಗಲಿರುವ ರೋಗ. ಇಲ್ಲಿನ ಜೀವನಾಧಾರವಾಗಿದ್ದ ಅಡಿಕೆ ತೋಟಗಳು ಸುಮಾರು ೪೦-೫೦ ವರ್ಷಗಳಿಂದಲೂ ಹಳದಿ ಎಲೆ ಮತ್ತು ತೊಂಡೆ ರೋಗಕ್ಕೆ ತುತ್ತಾಗಿ ಈಗಾಗಲೇ ಹೆಚ್ಚು ಕಡಿಮೆ ಎಲ್ಲ ನಾಶವಾಗಿವೆ. ಆ ರೋಗದ ಬಗ್ಗೆ ಅಂದಿನಿಂದ ಇಂದಿನವರೆಗೂ ನಡೆಯುತ್ತಿರುವ 'ಸಂಶೋಧನೆ'ಗಳು ಮಾತ್ರ ಇನ್ನೂ ಯಶಸ್ವಿಯಾಗಿಲ್ಲ. ಅದೇ ತೋಟಗಳಲ್ಲಿ ಜನ ಈಗ ಕಾಫಿ, ಏಲಕ್ಕಿ ಮುಂತಾಗಿ ಬೆಳೆಯಲು ಪ್ರಯತ್ನಿಸುತ್ತಿದ್ದಾರೆ. ಆದರೆ ಅದಕ್ಕೆ ಹಣ ತೊಡಗಿಸಲಾಗದವರು ಕಂಗಾಲಾಗಿ ದಿನ ದಿನಕ್ಕೆ ದಾರಿದ್ರ್ಯದತ್ತ ಜಾರುತ್ತಿದ್ದಾರೆ.

## ನೆಮ್ಮಾರು ಜನ ಸಂಪರ್ಕ ಸಭೆಯ ವಿವರಗಳು

(೧ನೇ ಪುಟದಿಂದ)

### ಡಿ.ಡಿ.ಟಿ. ಇಲ್ಲ

ಡಿ.ಡಿ.ಟಿ. ಹೊಡೆಸುವ ಕೆಲಸಕ್ಕೆ ೮ರೂ. ದಿನಗೂಲಿಗೆ ಜನ ಸಿಗುವುದಿಲ್ಲ. ಎನ್ಆರ್ ಇಪಿಯಲ್ಲಿ ಒಬ್ಬರಿಗೆ ಇಬ್ಬರ ಸಂಬಳ ಕೊಡುವಂತೆ ದೇವೇಂದ್ರಹೆಗ್ಡೆ ಸಲಹೆ. ತಾ.ಅ. ಮಂಡಳಿಯಿಂದ ೧ ಸಾವಿರ ರೂ. ನೆರವು. ಅದರಲ್ಲೂ ಪೂರೈಸುವುದಿಲ್ಲ. ಅಂತೂ ಸರ್ಕಾರ ದಿನಗೂಲಿ ಹೆಚ್ಚಿಸದೆ ಡಿ.ಡಿ.ಟಿ. ಇಲ್ಲ!

### ಜನಸಂಪರ್ಕ ಸಭೆಯಲ್ಲಿ ಪೋಲೀಸ್ ಇಲಾಖೆ?

ಜನಸಂಪರ್ಕ ಸಭೆಯಲ್ಲಿ ಸಾಮಾನ್ಯ ಜನರಿಗೆ ಕಿರುಕುಳ ಕೊಡುವ ಪೋಲೀಸ್ ಇಲಾಖೆಯೂ ಭಾಗವಹಿಸಬೇಕೆಂಬ ಕೋರಿಕೆ. ಶೃಂಗೇರಿಯ ಸಬ್ ಇನ್‌ಸ್ಪೆಕ್ಟರ್, ದಫೇದಾರ್ ಸುಬ್ರಾವ್, ಹಮೀದ್ ಎಂಬ ಪಿ. ಸಿ. ಮತ್ತು ಕೆಲವು ಪೋಲೀಸರ ಬಗ್ಗೆ ಗಂಭೀರ ಆರೋಪಗಳು. ಜಿಲ್ಲಾ ಪೋಲೀಸ್ ಅಧಿಕಾರಿಗಳಿಗೆ ತಿಳಿಸಿ ವಿಚಾರಣೆ ಮಾಡಿಸುವ ಭರವಸೆ.

ನೆಮ್ಮಾರಿಗೆ ಗಿರಿಜನರ ಪ್ರೌಢಶಾಲೆ, ಕೆರೆಕಟ್ಟೆಗೆ ಮಾಧ್ಯಮಿಕ ಶಾಲೆ ಬೇಡಿಕೆ. ವಿದ್ಯಾ...ಗಳ ಸಂಖ್ಯೆ ನೋಡಿ ಬೇಡಿಕೆ ಪರಿಶೀಸುವ ಭರವಸೆ.

### ಹುಲಿಕಾಟ

ಹುಲಿ ಹಾವಳಿ ತೀವ್ರವಾಗಿ ಹೆಚ್ಚಿದ್ದು, ಸೂಕ್ತ ಪರಿಹಾರದ ಭರವಸೆ. ೧೯ ಜನರಿಗೆ ಕೊಟ್ಟಾಗಿದೆ, ೪೫ ಪ್ರಕರಣ ಬಾಕಿ ಇದೆ.

ಕೆರೆಕಟ್ಟೆ ವಿದ್ಯುದ್ದೀಪ ಯೋಜನೆ ಆರ್. ಇ.ಸಿ.ಗೆ ಸೇರಿದೆ. ತ್ಯಾವಣ, ನೆಮ್ಮಾರು ಮುಂತಾದ ಉಳಿದ ಊರುಗಳ ಬಗ್ಗೆ ಪರಿಶೀಲಿಸಿ ಹಾಕಿಸುವುದಾಗಿ ದುಗ್ಗಪ್ಪ ಗೌಡರ ಭರವಸೆ. ಹಿಂದಿನ ಸಭೆಯಂತೆ ಇಲ್ಲೂ ತೀವ್ರ ಆರೋಪಗಳಿದ್ದವು.

ಕೃಷಿ ಇಲಾಖೆ: ಸಬ್ಸಿಡಿಯಲ್ಲಿ ಕೃಷಿ ಉಪಕರಣಗಳನ್ನು ಕೊಡುವಾಗ ಉತ್ತಮ ಗುಣಮಟ್ಟದವನ್ನು ಕೊಡಿ; ಅವಧಿ ಮೀರಿದ ಔಷಧಿಗಳನ್ನು ಕೊಡಬೇಡಿ ಮುಂತಾಗಿ ರೈತರಿಂದ ಎಚ್ಚರಿಕೆ.

ಪಿ.ಹೆಚ್.ಇ: ೭೭ ಹೊಸ ಬೇಡಿಕೆಗಳು, ಬರುವ ಬೇಸಿಗೆಗೆ ಈಡೇರಿಸುವ ಭರವಸೆ; ಬೋರ್‌ವೆಲ್‌ಗಳ ರಿಪೇರಿ, ಪಂಪ್ ಜೋಡಣೆಯ ಭರವಸೆ.

### ಕರ್ತವ್ಯದ ಪ್ರಶ್ನೆ ಮುಚ್ಚಿ ಹಾಕಿದರು

ಶೃಂಗೇರಿ ಟಿ.ಎ.ಪಿ.ಸಿ.ಎಂ.ಎಸ್. ವ್ಯವಹಾರಗಳ ಬಗ್ಗೆ ಬಿರುಸಿನ ಚರ್ಚೆ. ಸಹಕಾರ ಇಲಾಖೆಯ ಜಿಲ್ಲಾ ಅಧಿಕಾರಿ ನಜೀರ್ ಅಹಮದ್‌ಗೆ ತಬ್ಬಿಬ್ಬು. ಲಿಖಿತ ದೂರು ಇಲ್ಲವೆಂದು ಪ್ರಶ್ನೆಗೆ ಮೋಕ್ಷ ಕಾಣಿಸುವ ಯತ್ನ. ಬೆಟ್ಟಗೆರೆ ಸಹಕಾರ ಸಂಘದ ಬಗ್ಗೆ ಕೊಟ್ಟ ಲಿಖಿತ ದೂರಿನ ಪ್ರಶ್ನೆ ಎತ್ತಿದಾಗ ಜಿಲ್ಲಾಧಿಕಾರಿಗಳು ಅಧಿಕಾರಿಯ ಶಿಫಾರ್ಸು ವಹಿಸಿ, ಸದಸ್ಯರ ಕರ್ತವ್ಯದ ಪ್ರಶ್ನೆ ಎತ್ತಿ ಅಧಿಕಾರಿಯ ಕರ್ತವ್ಯದ ಪ್ರಶ್ನೆಯನ್ನೇ ಮುಚ್ಚಿಹಾಕಿದರು. ಕಡೆಗೆ ಎರಡೂ ಸಹಕಾರ ಸಂಘಗಳ ವಿಚಾರಣೆ ನಡೆಸಿ ನಡವಳಿಕೆ ಸಲ್ಲಿಸಲು ಆದೇಶಿಸಿದರು.

ಐಆರ್‌ಡಿಪಿ ಸಾಲಕ್ಕೆ ಜಾಮೀನು ಬೇಡ, ಇದನ್ನು ಬ್ಯಾಂಕ್ ಮ್ಯಾನೇಜರುಗಳಲ್ಲಿ ತಿಳಿಸುತ್ತೇನೆ. ಸಂಪರ್ಕ ಸಭೆಯಲ್ಲಿ ಪೋಲೀಸ್ ಇಲಾಖೆ ಹಾಜರಿ ಸಾಧ್ಯವಾಗದು, ನಿಮ್ಮ ದೂರುಗಳನ್ನು ಜಿಲ್ಲಾ ಪೋಲೀಸ್ ಮುಖ್ಯಾಧಿಕಾರಿಗಳೊಂದಿಗೆ ಚರ್ಚಿಸುತ್ತೇನೆ ಎಂದ ಜಿಲ್ಲಾಧಿಕಾರಿಗಳು ಬಿರುಸಿನ ಚರ್ಚೆಯ ವೇಳೆ ನೊಂದವರಲ್ಲಿ ಕ್ಷಮೆ ಕೋರಿದರು.

### ಗ್ರಾಮಾಭಿವೃದ್ಧಿಗೆ ಶೇ. ೪೦

ತಮ್ಮ ಸರ್ಕಾರ ಗ್ರಾಮೀಣ ಅಭಿವೃದ್ಧಿಗೆ ಶೇ. ೪೦ರಷ್ಟು ಹಣ ವಿನಿಯೋಗಿಸುತ್ತಿದೆ ಎಂದ ಶಾಸಕರು, ಇಕ್ಕಡ್ಲುಹಳ್ಳ ಸೇತುವೆಗೆ ೭ ಲಕ್ಷ ರೂ., ಕೆರೆಕಟ್ಟೆ–ಶೃಂಗೇರಿ ರಸ್ತೆಗೆ ೨೭ ಲಕ್ಷ ರೂ. ಹಾಗೂ ನೆಮ್ಮಾರಿಗೆ ಆಸ್ಪತ್ರೆ ಮಂಜೂರಾಗಿರುವುದನ್ನು ಜ್ಞಾಪಿಸಿದರು.

ಕೆ. ಎ. ರವೀಂದ್ರ ನಾಥ್ ಸ್ವಾಗತಿಸಿ, ಕಚ್ಚೋಡಿ ಶ್ರೀನಿವಾಸ್ ವಂದಿಸಿದರು.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀಪಿಕೆಗೆ ಅಚ್ಚುಕೂಟ, ಕೊಪ್ಪ. ಶೃಂಗೇರಿ ಪ್ರತಿನಿಧಿ: ಕಲ್ಕುಳಿ ವಿಠಲ ಹೆಗ್ಡೆ